ಆತ್ಮಾನುಭವ ಕುಸುಮ ೨

|| ಓಂ ||

# ಸುಜ್ಞಾನಾಮೃತ.



ಆದರ್ಶ ಮಹಾಶಿವಯೋಗಿಗಳು

ಲೇಖಕರು.—

ಜಿ ಎಸ್ ಹಿರೇಮಠ, ಅಮ್ಮಣಗಿ,

ಜಿಲ್ಲಾ—ಬೆಳಗಾವಿ

೧೯೩೬ ] [ ಬೆಲೆ ೬ ಆಣೆ.

|| ಓಂ ||

# ಸುಜ್ಞಾನಾಮೃತ.



ಲೇಖಕರು,

ಜಿ ಎಸ್ ಹಿರೇಮಠ, ಅಮ್ಮಣಗಿ,

ಜಿಲ್ಹಾ—ಬೆಳಗಾಂವ



ಮೊದಲನೆಯ ಆವೃತ್ತಿ ಪ್ರತಿ ೨೦೦೦

೧೯೫೬ ] [ ಬೆಲೆ ೬ ಆಣೆ

ಮುದ್ರಕರು —
ಬ ಡಿ ಚೌಗುಲೆ,
ಶ್ರೀಮಹಾವೀರ ಮುದ್ರಣಾಲಯ,
ಬೆಳಗಾವಿ



ಪ್ರಕಾಶಕರು —
ಜಿ ಎಸ್ ಹಿರೇಮಠ,
ಆತ್ಮಾನುಭವ ಪ್ರಕಟನಾಲಯ,
ನಿಡಸೋಸಿ.

# ನಿವೇದನೆ.

ಸಾಧಕ ಜೀವಿಯಾಗಿ ಬಾಳುವಾಗ ಸ್ವಾನುಭವಕ್ಕೆ ಆಗಾಗ ಬಂದವುಗಳನ್ನು
ಎಚ್ಚರದಿಂದ ನಡೆಯುಲು ಪ್ರಯತ್ನಿಸುವದಕ್ಕಾಗಿ ಸಂಗ್ರಹಿಸಿಟ್ಟು
ಕೊಂಡು ಕೇವಲ ನನಗಾಗಿ ಬರೆದುಕೊಂಡವುಗಳನ್ನು ನನ್ನಂತೆ
ಸಾಧಕ ಸ್ಥಿತಿಯಲ್ಲಿದ್ದ ಆತ್ಮಬಂಧುಗಳಿಗೆ ಅವುಗಳ ಉಪ
ಯೋಗವಾಗುವಂತಿದ್ದರೆ, ಆಗಲೆಂಬ ಆಶೆಯಿಂದ
ಪ್ರಕಟಿಸಿದುದಾಗಿದೆ ಇದರಲ್ಲಿ ಏನಾದರೂ
ತಪ್ಪುತಡಿಗಳಾಗಿದ್ದರೆ ಹಂಸಕ್ಷೀರ
ನ್ಯಾಯದಂತೆ ಸ್ವೀಕರಿಸ
ಬೇಕಾಗಿ ಪ್ರಾರ್ಥನೆ

**ಗಂಗಾಧರ ಸುಜ್ಞಾನಶಾಸ್ತ್ರೀ ಹಿರೇಮಠ**

# ಆಶೀರ್ವಾದ



ತನ್ನ ಹೆಜ್ಜೆಗ-ನ್ನಿಡುತ್ತ ನಡೆಯಲು ಕಲಿಯುವ ಶಿಶುವಿಗೆ ಹಿರಿಯರು ಪ್ರೋತ್ಸಾಹಿಸಿ ನಡೆಸುವಂತ ನನ್ನ ಅಲ್ಪಮತಿಗೆ ಸಾಧಕ ಸ್ಥಿತಿಯಲ್ಲಿ ಬಂದ ಅನುಭವಗಳ ಮೊದಲನೆಯ ಕುಸುಮವು ಅಚ್ಚಾದ ಬಳಿಕ ಓದಿಸಿ, ಪ್ರೇಮದಿಂದ ಕೇಳಿ, ಆಶೀರ್ವದಿಸಿ ಪ್ರೋತ್ಸಾಹಿಸಿದುದಕ್ಕಾಗಿ ಆಧುನಿಕ ಕಾಲದಲ್ಲಿ ಶಿವಾನುಭವದಲ್ಲಿ ಅಗ್ರಗಣ್ಯರಾದ ಮಹಾತಪಸ್ವಿಗಳೂ,

ಪರಮ ವೈರಾಗ್ಯ ಮೂರ್ತಿಗಳೂ

**ಶ್ರೀಕ್ಷೇತ್ರ ಅರಭಾಂವಿ ಪುಣ್ಯಾರಣ್ಯದ ನವಮ**

**ಶ್ರೀದುರದುಂಡೀಶ್ವರ ಮಹಾಸ್ವಾಮಿಗಳಾದ**

**ಶ್ರೀ. ಮ. ನಿ. ಪ್ರ. ಸ್ವ. ಶ್ರೀಮಹಾಂತ ಶಿವಯೋಗಿಗಳವರ**

ಪಾದಾರವಿಂದದಲ್ಲಿ ಚಿರ ಋಣಿಯಾಗಿದ್ದೇನೆ

ಜಿ ಎಸ್ ಹಿರೇಮಠ



ಶ್ರೀಮನ್ನಿರಂಜನ ಜಗದ್ಗುರು ಶ್ರೀದುರದುಂಡೀಶ್ವರ ಮಠಾಧೀಶ
ಶ್ರೀಮಹಾಂತ ಶಿವಯೋಗಿಗಳು ಸಿದ್ಧ ಸಂಸ್ಥಾನ ಮಠ ಅರಭಾಂವಿ.



ಶ್ರೀಮನ್ನಿರಂಜನ ಜಗದ್ಗುರು ಶ್ರೀದುರದುಂಡೀಶ್ವರ ಮಠಾಧೀಶ
ಶ್ರೀಶಿವಲಿಂಗೇಶ್ವರ ಮಹಾಸ್ವಾಮಿಗಳು
ನ್ಯಾಯವೈಶೇಷಿಕಾಚಾರ್ಯ ದರ್ಶನ ವಿಶಾರದ
ಸಿದ್ಧ ಸಂಸ್ಥಾನ ಮಠ ನಿಡಸೋಸಿ

# ಅರ್ಪಣೆ.



ಯಾರ ಆದರ್ಶ ಬ್ರಹ್ಮಚರ್ಯ ಜೀವನವು ನನ್ನ ಬಾಲ್ಯದಲ್ಲಿ ಎಳೆ ಮನಸ್ಸಿನ
ಮೇಲೆ ಪರಿಣಾಮವನ್ನುಂಟು ಮಾಡಿದುದರ ಸಲುವಾಗಿ ಇಲ್ಲಿಯವರೆಗೂ
ಉತ್ತಮ ರೀತಿಯಿಂದ ಬ್ರಹ್ಮಚರ್ಯ ಪಾಲನ ಮಾಡಲು ಸಹಾಯ
ವಾಗಿರುವದೋ ಆ ಪರಮಪೂಜ್ಯರೂ ಘನ ಪಂಡಿತರೂ
ಮಹಾ ತಪಸ್ವಿಗಳೂ ವ್ಯವಹಾರ ಚತುರರೂ
ಉಪಕಾರಿಗಳೂ ಆದ

**ಶ್ರೀಮನ್ನಿರಂಜನ ಜಗದ್ಗುರು ಶ್ರೀಶಿವಲಿಂಗೇಶ್ವರ ಮಹಾಸ್ವಾಮಿಗಳು**
**ಗುರು ಶ್ರೀನಿಜಲಿಂಗೇಶ್ವರ ಮಹಾ ಸ್ವಾಮಿಗಳು**
**ಸಿದ್ಧಸಂಸ್ಥಾನ ಮಠ ನಿಡಸೋಸಿ**

ನ್ಯಾಯ ವೈಶೇಷಿಕಾಚಾರ್ಯ ದರ್ಶನ ವಿಶಾರದರಾದ ಮಹಾಸ್ವಾಮಿಗಳವರು
ಈಗ ತಾನೇ ೫೪ ವರ್ಷಗಳ ಲಿಂಗಾನಂದ ವೈಭವ ಸಾಮ್ರಾಜ್ಯದ
ಅನುಭವ ಪಡೆದ ಸುಸಮಯದಲ್ಲಿ ಈ ನನ್ನ ಅಲ್ಪ ಅನುಭವವನ್ನು
ಅವರ ಚರಣ ಕಮಲಗಳಲ್ಲಿ ಅತ್ಯಂತ ಭಕ್ತಿ ಪ್ರೇಮಾದರಗಳಿಂದ
ಅರ್ಪಿಸಿ, ಶ್ರೀದುರದುಂಡೀಶನು ಅವರಿಗೆ ಸುದೀರ್ಘ
ಆಯುರಾರೋಗ್ಯ ಲಿಂಗಾನಂದ ವೈಭವ ಸಾಮ್ರಾಜ್ಯ
ವನ್ನುಂಟು ಮಾಡಲೆಂದು ಪ್ರಾರ್ಥಿಸುತ್ತೇನೆ

ಅಕ್ಷಯ್ಯ ತೃತೀಯಾ
ಜಯನಾಮ ಸಂವತ್ಸರ
ಶಕೆ ೧೮೭೬ }

ಜಿ ಎಸ್ ಹಿರೇಮಠ



# ಬ್ರಹ್ಮಚರ್ಯಮ್.

ಯಃ ಕಾಯೇನ ವಾಚಾ ಮನಸಾ ಚ ವೀರ್ಯಪಾಲನಂ ಕರೋತಿ ಸಃ ಬ್ರಹ್ಮಚಾರೀತಿಕಥ್ಯತೇ । ಪೂರ್ವಕಾಲೇ ಪೂರ್ವಜಾಃ ಮನುಷ್ಯಸ್ಯ ಆಯುಷಿ ಬ್ರಹ್ಮಚರ್ಯಾದೀನ್ ಆಶ್ರಮಾನ್ ಅಕುರ್ವನ್। ಸರ್ವೇ ಬಾಲಾಃ ಪಂಚವಿಂಶತಿ ವರ್ಷಪರ್ಯಂತಂ ಬ್ರಹ್ಮಚಾರಿಣೋ ಭವೇಯುರಿತಿ ನಿಯಮ ಆಸೀತ್ । ತೇ ಸ್ವಗುರೋಸ್ಸನ್ನಿಧೌ ವಿದ್ಯಾಭ್ಯಾಸಂ ಅಕುರ್ವಂತ । ಗುರೋ ರಾಜ್ಞಾಂ ವಿನಾ ತೇ ಪರಿಣೇತುಂ ನ ಶಕ್ತಾ ಆಸನ್ । ತಸ್ಮಾತ್ತೇಷಾಂ ಮನಾಂಸಿ ಚಂಚಲಾನಿ ನ ಬಭೂವುಃ । ವೀರ್ಯಾನ್ನರಾಃ ವೀರತ್ವಮಾಪ್ನುವಂತಿ । ಶರೀರೇ ತು ಮುಖ್ಯಂ ವೀರ್ಯಮ್ । ವೀರ್ಯಂ ಶರೀರೇ ರಾಜಾ ಇವಾಸ್ತಿ । ಯಃ ಅಖಂಡ ಬ್ರಹ್ಮಚಾರೀ ಅಸ್ತಿ ಸಃ ಬುದ್ಧಿಮಾನ್ ಭವತಿ । ವೀರ್ಯಪಾಲನಂ ಕೃತ್ವಾ ಜಿತೇಂದ್ರಿಯತ್ವಂ ಪ್ರಾಪ್ತಾಃ ಬಹವೋ ನರಾಃ ಸಂತಿ ।

ಬ್ರಹ್ಮಚರ್ಯ ವ್ರತೇನ ಶರೀರಂ ಬಲಂ ಧೈರ್ಯಮಿತ್ಯಾದಿಕಂ ಪ್ರಾಪ್ನೋತಿ। ಇದಮನುಭವೇನ ಸತ್ಯಮ್। ಪಾಶ್ಚಿಮಾತ್ಯಾ ಅಪಿ ಬ್ರಹ್ಮಚರ್ಯವ್ರತಂ ಪಾಲಯಂತಿ । ಪಂಚವಿಂಶತಿ ವರ್ಷ ಪರ್ಯಂತಂ ವಿದ್ಯಾಭ್ಯಾಸೇ ಕಾಲಂ ನಯಂತಿ । ತಸ್ಮಾತ್ತೇ ದೃಢಕಾಯಾಃ ವಿದ್ವಾಂಸಾಃ ಇತಿ ಜಗತ್ಪ್ರಸಿದ್ಧಾಃ ।

ಪೂರ್ವಸ್ಮಿನ್ಕಾಲೇ ಅಸ್ಮಾಕಂ ಪೂರ್ವಜಾಃ ಬ್ರಹ್ಮಚರ್ಯೇಣ ಜಗತ್ಪ್ರಸಿದ್ಧಾಃ ಆಸನ್ । ಯದಾ ಅಸ್ಮಾಕಂ ದುರ್ದೈವೇನ ಬ್ರಹ್ಮಚರ್ಯಂ ಕ್ಷೀಣತ್ವಮಗಾತ್ತದಾ ಭರತಖಂಡಮ್ ಅಧೋಗತಿಂ ಪ್ರಾಪ್ನೋತ್ । ಅಸ್ಮಾಕಂ ದೇಶಸ್ಯ ಪಾರತಂತ್ರ್ಯಸ್ಯ ಬಹೂನಿ ಕಾರಣಾನಿ ಸಂತಿ । ತೇಷು ಬ್ರಹ್ಮಚರ್ಯಾಭಾವೋಪ್ಯೇಕಃ ।

ಬ್ರಹ್ಮಚರ್ಯಸ್ಯ ನಾಶಸ್ಯ ಬಾಲವಿವಾಹಕಾಮುಕವೃತ್ತ್ಯಾದೀನಿ ಬಹೂನಿ ಕಾರಣಾನಿ ಸಂತಿ । ಷಷ್ಟಿರಕ್ತಬಿಂದುಭಿರೇಕೋ ವೀರ್ಯಬಿಂದುರ್ಭವತಿ ಇತಿ ಭಿಷಗ್ವರ್ಯಾಃ ಕಥಯಂತಿ । ತಸ್ಮಾದಸ್ಮಾಕಂ ಮೂರ್ಖಭ್ರಾತೄಣಾಂ ಪರಮಾತ್ಮಾ ತಥಾ ಕರೋತು ಯಥಾ ತೇಷಾಂ ಬುದ್ಧಿಭ್ರಂಶೋ ನ ಭವೇತ್ ।

ಸರ್ವೇ ಬಾಲಾಃ ಬ್ರಹ್ಮಚರ್ಯೇಣ ಆಯುಷಃ ಸಾಫಲ್ಯಂ ಕುರ್ವಂತು ಇತಿ ಶಿವಂ ಸ್ಮರಾಮಿ । ಸರ್ವೇಜನಾಃ ಸುಖಿನೋ ಭವಂತು ।

ಜಿ. ಎಸ್. ಹಿರೇಮಠ

---

|| ಓಂ ||

# ಸುಜ್ಞಾನಾಮೃತ.



೧ ಶ್ರೀದೇವರು ಮಾಡುವದೆಲ್ಲವೂ ಹಿತಕ್ಕೇನೇ ಆಯಾಯು ಕಾಲಕ್ಕನುಸಾರವಾಗಿ ಸುಖದುಃಖಗಳು ಸಂಭವಿಸುವವು. ನಮಗೆ ಸಂಭವಿಸಿದ ದುಃಖಕ್ಕಾಗಿ ಎರಡನೆಯವರ ಮೇಲೆ ವಿನಾಕಾರಣ ವಾಗಿ ಸಿಟ್ಟು ಮಾಡುವದು ಹುಚ್ಚುತನವೇ ಸರಿ ಕ್ರಿಯಮಾಣ, ಸಂಚಿತ ಮತ್ತು ಪ್ರಾರಬ್ಧಗಳಿಗೆನುಸಾರವಾಗಿ ಕಾಯಾ, ವಾಚಾ, ಮನಸಾ, ಅವು ಹೇಗೆ ಆಗಿರುವವೋ ಆದರಂತೆ ಭೋಗಿಸಲೇಬೇಕಾ ಗುವದು,

೨ ಎರಡನೇಯವರು ನಮಗೆಷ್ಟು ಕಷ್ಟ ಕೊಟ್ಟಿದ್ದರೂ ಅವರು ದುರ್ಬಲರಾದಾಗ್ಗೆ ಅವರ ಸೇಡು ತೀರಿಸಿಕೊಳ್ಳುವ ವೃತ್ತಿ ಬರ ಕೂಡದು. ಪ್ರೇಮದಿಂದಲೇ ಅವರಿಗೆ ಸಹಾಯ ಮಾಡಿ ಅವರ ಹೃದಯ ಪರಿವರ್ತನೆಗೊಳಿಸಲು ಪ್ರಯತ್ನ ಮಾಡುವದು.

೩. ಶಕ್ತಿಗಿಂತ ಯುಕ್ತಿಯೇ ಮೇಲು. ಪರರನ್ನು ನಮ್ಮ ಶಕ್ತಿ ಯಿಂದ ಅಧೀನದಲ್ಲಿರಿಸಿಕೊಂಡರೆ ನಮ್ಮ ಶಕ್ತಿ ಕಡಿಮೆಯಾಗಲು ಅವರು ಆದರ ಸಂಧಿ ಸಾಧಿಸದೆ ಬಿಡರು ಅದೇ ಪ್ರೇಮದಿಂದ ಪರ ರನ್ನು ವಶ ಮಾಡಿಕೊಂಡಿದ್ದರೆ ಶಕ್ತಿಯಿರಲಿ ಇಲ್ಲದಿರಲಿ ಸ್ತ್ರುತಃ ಪ್ರೇಮದಿಂದಲೇ ಇರುವರು.

೪ ವ್ಯಾಧಿದವರು ತಮ್ಮ ಕರ್ಮದ ಫಲವನ್ನು ಅನುಭವಿಸಲೇ

೫ ಈ ಜಗತ್ತಿನಲ್ಲಿ ಪರಮಾತ್ಮನಿಗಿಂತ ಶ್ರೇಷ್ಠ ಬಂಧುವಿಲ್ಲ. ವಿಶ್ವಬಂಧುತ್ವದಿಂದ ನಾವಿದ್ದರೂ ಕೂಡ ಪ್ರತಿಯೊಬ್ಬರಲ್ಲಿ ಒಂದಿ ಲ್ಲೊಂದು ಸ್ವಾರ್ಥವಿದ್ದದ್ದೇ ಆದರೆ ಪರಮಾತ್ಮನು ಕೇವಲ ನಮ್ಮ ಹಿತವನ್ನೇ ಅಪೇಕ್ಷಿಸುವನು. ಹೀಗಿದ್ದರೂ ಕೂಡ ಅವನನ್ನು ನಾವು ಮರೆಯುವೆವು

೬ ಕಾಲಮಹಿಮೆ ದೊಡ್ಡದು. "ಸ್ತ್ರೀಯಶ್ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ" ಯೆಂಬಂತೆ ಉತ್ತಮರಿಂದಲೂ ಕೀಳು ಕೆಲಸಗಳಾಗುವವು ಮತ್ತು ಕೀಳು ಜನ ರಿಂದಲೂ ಉತ್ತಮ ಕೆಲಸಗಳಾಗುವವು. ಅದರಿಂದ ಕಾಲಮಹಿಮೆ ತಿಳಿಯದು.

೭ ಆತ್ಮೋನ್ನತಿಯಾಗಬೇಕಾದರೆ ಸತ್ಸಂಗವು ಅವಶ್ಯವಾ ದದ್ದು ವಿಕಾರಿಗಳ ಸಂಗವಾದರೆ ಸಾಧಕನಿಗೆ ತನ್ನಲ್ಲಿದ್ದ ಅವಗುಣ ಗಳನ್ನು ಬಿಡುವುದರ ಹೊರತು ಅವರಲ್ಲಿದ್ದ ದುಷ್ಟ ಗುಣಗಳನ್ನು ತನ್ನಲ್ಲಿ ಸೇರಿಸಿಕೊಳ್ಳುವದೇ ಆಗುವದು ಅದರಿಂದ ಸಾಧಕನ ಪ್ರಗತಿ ಆಗದು ಸಾಧಕನು ಮೊದಮೊದಲು ಕೇವಲ ಸತ್ಸಂಗದಲ್ಲಿದ್ದು ಬೇರೆಯುವರ ನೆರಳಿಗೂ ಕೂಡ ಹೋಗಕೂಡದು. ಅಂದರೇನೇ ಪ್ರಗತಿ ಸಾಧ್ಯ

೮ ಯಾವುದೇ ವ್ಯಾಸಂಗವನ್ನು ಮಾಡಬೇಕಾದರೆ ಅದರಲ್ಲಿ ಆತ್ಮೀಯತೆ ಅವಶ್ಯವಾದದ್ದು. ಆದರಿಂದಲೇ ಸಿದ್ಧಿ ಪ್ರಾಪ್ತವಾಗು ವದು.

೯ ಮನಸ್ಸಿನಲ್ಲೆಷ್ಟು ಹಂಚಿಕೆ ಮಾಡಿದರೂ ಕೃತಿಯಲ್ಲಿ ಬರದ ಹೊರತು ಉಪಯೋಗವಾಗಲಾರದು. ಭಾವನೆ ಶುದ್ಧವಾಗಿರಬೇಕು.

೧೦ ಶುಭ ಕೆಲಸಗಳನ್ನು ಶೀಘ್ರವಾಗಿ ಮಾಡುವದೊಳಿತು ತಡ ಮಾಡಬಾರದು. ಒಂದು ಕ್ಷಣ ತಡವಾದರೆ ಕೈಗೆ ಬಂದುದು ಬಾಯಿಗೆ ಬರಲಿಲ್ಲವೆಂದಾಗಬಹುದು ಆದೇ ಅಶುಭ ಕೆಲಸಗಳಿಗೆ ಕಾಲಹರಣ ಮಾಡಿದಷ್ಟು ನೆಟ್ಟಗೆ, ಯಾಕಂದರೆ ಆ ಕೆಟ್ಟ ವೇಳೆ ಕಳೆದು ಹೋದರೆ ಮುಂದೆ ಎಲ್ಲವೂ ಪರಿವರ್ತನಹೊಂದಬಹುದು.

೧೧ ತಲೆಗೆ ಬಡಿಯದ ಹೊರತು ಬಾಗಲಾರರು. ಬಡಿಸಿಕೊಂಡವರು ತಮ್ಮ ಅನುಭವವನ್ನು ಹೇಳಿದರೂ ಕೇಳುವಷ್ಟು ಹೊಸಬರಲ್ಲಿ ಶಾಂತತೆ ಇರುವದಿಲ್ಲ. ಅದನ್ನು ನೋಡಿ ಹಿರಿಯರಿಗೆ ಕಿರಿಯರ ತಿಳಿಗೇಡಿತನಕ್ಕೆ ಸಿಟ್ಟು ಬರುವದೂ ಸ್ವಾಭಾವಿಕವು. ಆದರೂ ಹಿರಿಯರಾದವರೂ ಕೂಡ ತಾವೆಷ್ಟು ತೀವ್ರವಾಗಿ ಅವರಿಗಿಂತ ಹಿರಿಯರ ಅನುಭವಗಳನ್ನು ಕೇಳುತ್ತಿದ್ದರೆಂಬುದನ್ನು ತಾವೇ ವಿಚಾರಿಸಿಕೊಂಡರೆ ಆಗ ತಿಳಿಯುವದು, ತಾರುಣ್ಯದ ಮದದಲ್ಲಿ ಅವಿಚಾರತನವು ಸ್ವಾಭಾವಿಕವೆಂಬುದು. ಆದರಿಂದ ಮನಸ್ಸಿಗೆ ತಾಪಮಾಡಿಕೊಳ್ಳದೆ ಕೇವಲ ಸೂಚನೆಯೊಂದೇ ಹೇಳುವದೊಳಿತು.

೧೨ ಸಾಧಕನು ಯಾವಾಗಲೂ ಈ ವಿಶ್ವವೆಂಬ ಪಾಠಶಾಲೆಯಲ್ಲಿ ಕಲಿತುಕೊಳ್ಳುವದು ಬಹಳಿದೆ ಅದನ್ನು ಬಿಟ್ಟು ತನ್ನಂತೆಯೇ ಇದ್ದ ಜೀವರುಗಳ ಗುಣದೋಷಗಳನ್ನೆಣಿಸುತ್ತ ಕೂಡ್ರಬಾರದು.

೧೩ ಇದ್ದುದನ್ನು ಕಳೆದುಕೊಂಡು ಹುಡುಕುವದಕ್ಕಿಂತ ಮೊದಲೇ ಎಚ್ಚರದಿಂದಿರುವದೊಳಿತು.

೧೪ ನಮ್ಮ ಮನಸ್ಸಿನ ವಿರುದ್ಧವಾಗಿ ನಡೆಯುವವರ ಮೇಲೆ ಸಿಟ್ಟು ಮಾಡಿ ಮನಸ್ಸಿಗೆ ತಾಪ ಮಾಡಿಕೊಳ್ಳುವದಕ್ಕಿಂತ ಅವರು ಪಶುಪಕ್ಷಿಗಳಂತೆಯೇ ಈಶನ ಸೃಷ್ಟಿಯಲ್ಲೊಂದು ಎಂದು ತಿಳಿದರೆ ಮನಸ್ಸಿಗೆ ಅಷ್ಟು ತ್ರಾಸಾಗದು.

೧೫ ಪರಮಾತ್ಮನಲ್ಲಿ ಪೂರ್ಣ ನಂಬಿಗೆ ಬೇಕು. ಅವನೆಂದಿಗೂ ನಮಗೆ ಅಹಿತ ಮಾಡಲಾರನೆಂಬ ವಿಶ್ವಾಸ ಬೇಕು ಅಂದರೇನೇ ಆನಂದದಿಂದಿರಲು ಅವಕಾಶವಾಗುವದು

೧೬ ಸಾವಕಾಶವಾಗಿ ಅಂಗೆದಲ್ಲಿಯ ಅವಗುಣಗಳನ್ನು ಕಳೆಯ ಬೇಕು ಅಂದರೆ ಅಷ್ಟು ತ್ರಾಸಾಗದು ಒಮ್ಮೆಲೇ ಎಲ್ಲ ಬಿಡುವದು ಸಕಲರಿಗೂ ಸಾಧಿಸುವದು ಕಠಿಣವಾಗಬಹುದು

೧೭ ಅಹಂಭಾವವನ್ನು ಬಿಡದ ಹೊರತು ಎಷ್ಟು ಶ್ರವಣ ಮಾಡಿದರೂ ವ್ಯರ್ಥವೇ

೧೮ ಶರೀರದ ಮೇಲೆ ಬಹಳೇ ಪ್ರೇಮವಿಟ್ಟು ಆತ್ಮಘಾತ ಮಾಡಿಕೊಳ್ಳಬಾರದು. ಒಂದಿಲ್ಲೊಂದು ದಿನ ಈ ಶರೀರವನ್ನು ಬಿಡ ಬೇಕಾಗುವದು

೧೯ ತನ್ನ ಕರ್ತವ್ಯದ ಕಡೆಗೆ ಹೆಚ್ಚು ಲಕ್ಷ್ಯವಿರಬೇಕು. ಅದನ್ನು ಮರೆತು ಉಳಿದ ಕೆಲಸಗಳಲ್ಲಿ ಕಾಲಹರಣ ಮಾಡಿದರೆ ಪಶ್ಚಾತ್ತಾಪವು ಕಟ್ಟಿಟ್ಟದ್ದು.

೨೦ ಎರಡನೆಯವರಾಶ್ರಯದಲ್ಲಿದ್ದು ನಮ್ಮ ಕುಬುದ್ಧಿಗಳಿಂದ ಅವರ ಮನಸ್ಸನ್ನು ನೋಯಿಸಿದರೆ ಆಶ್ರಯವು ಹೇಗೆ ಸಿಕ್ಕೀತು ? ಅದರಿಂದ ಯಾರ ಆಶ್ರಯದಲ್ಲಿರುವೆವೋ ಅವರ ಮನಸ್ಸಿಗೆ ಅಸಮಾ ಧಾನವನ್ನುಂಟು ಮಾಡದೆ ಅವರ ಉಪಕಾರವನ್ನು ಹೇಗೆ ತೀರಿಸ ಲೆಂದು ಹಂಬಲಿಸಬೇಕು ಅಂದರೆ ಅವರ ವಿರುದ್ಧ ಮಾಡುವ ಮನಸ್ಸೇ ಆಗದು

೨೧ ನಮ್ಮಕಿಂತಲೂ ಸರ್ವ ಶಕ್ತಿವಾನ್ ಆದ ಶಕ್ತಿಯೊಂದು ಒಂದಿದ್ದೆ ಅದು ಅಘಟಿತ ಘಟನೆಗಳನ್ನು ಮಾಡಬಲ್ಲದು ನಾವು ಅದರ ಕೈಯೊಳಗಿನ ಸೂತ್ರದ ಗೊಂಬೆಯಂತಾಗಿದ್ದೇವೆ.

೨೨ ನಮಗೆ ರೋಗಾದಿಗಳಾಗಲು ವ್ಯಸನಪಡುತ್ತೇವೆ ಆದರೆ ಅದೂ ಪರಮಾತ್ಮನ ಕೃಪೆಯೇ ಆಗಿರುವದು ಅದರಿಂದ ನಮ್ಮ ಪಾಪವಿಮೋಚನೆಯಾಗಿ ನಮ್ಮ ಮನಸ್ಸು ಸುಧಾರಿಸಿ ಹೊಸಬ ರಾಗುವೆವು.

೨೩ ತನ್ನ ಯೋಗ್ಯತೆಯನ್ನರಿತು ಎರಡನೆಯವರ ಕೂಡ ವಾದ ವಿವಾದ ಮಾಡಬೇಕು

೨೪ ಸಂಸ್ಕಾರವಿಲ್ಲದ ಹೊರತು ಪರಿವರ್ತನೆ ಶಕ್ಯವಿಲ್ಲ. ಅದರಿಂದ ಉತ್ತಮ ಸಂಸ್ಕಾರದಲ್ಲಿರಬೇಕು.

೨೫ ಮನುಷ್ಯನು ತಾನು ಮಾಡುವದೆಲ್ಲವೂ ಯೋಗ್ಯವೆಂದೇ ಭಾವಿಸುವನು ತನ್ನ ಗುಣದೋಷಗಳೇ ಕಾಣುವದಿಲ್ಲ ಅಂದಬಳಿಕ ತನ್ನ ಪ್ರಗತಿಯಾಗಬೇಕಾದರೆ ಪರರು ನಮ್ಮ ಬಗ್ಗೆ ಕಳಕಳಿಯಿಂದೇ ನಾದರೂ ನಮ್ಮ ಗುಣದೋಷವನ್ನು ಹೇಳಿಕೊಟ್ಟರೆ ಸಿಟ್ಟಿಗೆ ಬಾರದೆ ಆನಂದದಿಂದ ಅವರ ಉಪಕಾರ ಸ್ಮರಿಸಿ ಕೇಳಿಕೊಳ್ಳಬೇಕು,

೨೬ ಒಳಗಿನ ವಾಸನೆಗಳು ಹೋಗದೆ ಎಷ್ಟು ಕಠೋರ ತಪಸ್ಸು ಮಾಡಿದರೂ ವ್ಯರ್ಥವಾದದ್ದೇ ಸರಿ.

೨೭ ತನ್ನೊಳಗೆ ತಾ ನಂಬಿರಬೇಕು. ಆತ್ಮವಿಶ್ವಾಸ ಬೇಕು,

೨೮ ಆತ್ಮಹತ್ಯವನ್ನೆಂದಿಗೂ ಮಾಡಿಕೊಳ್ಳಬಾರದು ಹಿಂದಿನ ಕರ್ಮಕ್ಕನುಸರಿಸಿ ಕೆಟ್ಟ ಪ್ರಸಂಗಗಳು ಬಂದು ಜೀವ ಕೊಡುವ ದಕ್ಕೂ ಮಾನವನು ಹಿಂಜರಿಯುವದಿಲ್ಲ. ಹಾಗೆ ಮಾಡಿದರೆ ಮಹಾ ಪಾಪವನ್ನು ಮಾಡಿ ಈಗಿನಕಿಂತಲೂ ಮುಂದಿನ ಜನ್ಮದಲ್ಲಿ ಹೆಚ್ಚಿನ ತಾಪತ್ರಯಕ್ಕೇ ಗುರಿಯಾಗಬೇಕಾಗುವದು ಹೊರತು ಬಿಡದು. ಅದ ರಿಂದ ಪೂರ್ವ ಸಂಚಿತವನ್ನು ಶಾಂತರೀತಿಯಿಂದ ತೀರಿಸಬೇಕು.

೨೯ ಕಷ್ಟಗಳು ಬಂದಾಗ ಪಶ್ಚಾತ್ತಾಪಪಟ್ಟು ಪ್ರಾರ್ಥಿಸಿದರೆ ಪರಮಾತ್ಮನ ಸಹಾಯವು ಬರುವದರಲ್ಲಿ ಸಂದೇಹವಿಲ್ಲ.

೩೦ ಕರ್ಮ ಬಂಧನವನ್ನು ನೀಗಿ ನರನು ನಾರಾಯಣನಾಗಲು ಹಂಬಲಿಸಬೇಕು

೩೧ ಪುಕ್ಕಟೆಯಾಗಿ ಸಿಗುವದೆಂದು ಪರಾವಲಂಬಿಯಾಗ ಬಾರದು.

೩೨ ಗರ್ವದಿಂದ ಉತ್ಕರ್ಷದ ಕೇಡು ಕಟ್ಟಿಟ್ಟದ್ದೇ.

೩೩ ನಮ್ಮ ಊರ್ಜಿತಾವಸ್ಥೆಯಲ್ಲಿ ಕಷ್ಟಜೀವಿಗಳ ಬಗ್ಗೆ ದಯೆ ತೋರಬೇಕು.

೩೪ ನಮಗೆ ಕಷ್ಟಗಳು ಬಂದಾಗ ಎದೆಯೊಡೆದುಕೊಳ್ಳ ಬಾರದು. ಧೈರ್ಯದಿಂದ ಬಂದದ್ದು ಬರಲಿ ಶ್ರೀಗುರುವಿನ ದಯೆಯೊಂದಿರಲೆಂದು ಕಷ್ಟಗಳನ್ನೆದುರಿಸಬೇಕು.

೩೫ ವಿಘ್ನ ಸಂತೋಷಿಗಳಾಗಬಾರದು.

೩೬ ಅತ್ಯಂತ ಮಹಾರೋಗಿಯನ್ನು ನೋಡಿದರೂ ಅವನ ಬಗ್ಗೆ ತಿರಸ್ಕಾರ ಪಡದೆ ದಯೆಯಿರಬೇಕು

೩೭ ತಿಳಿದವರು ತಿಳಿಗೇಡಿಗಳಂತೆ ನಡೆಯುವದು ಅಕ್ಷಮ್ಯ. ಜ್ಞಾನಿಯು ಅಜ್ಞಾನಿಯಂತೆ ವರ್ತಿಸುವದು ಯೋಗ್ಯವಲ್ಲ. ಕ್ಷಮೆ ಸಿಗದೆ ಹೆಚ್ಚಿನ ಶಿಕ್ಷೆಗೆ ಗುರಿಯಾಗಬೇಕಾಗುವದು

೩೮ ಎಂದಿಗೂ ಯಾರ ಮನಸ್ಸನ್ನೂ ನೋಯಿಸಬೇಡ. ಪರರಲ್ಲಿ ದೋಷಗಳು ಕಂಡು ಬಂದರೆ ಟೀಕಿಸಬೇಡ ಪರ್ಯಾಯದಿಂದ ತಿಳಿಸಿ ಹೇಳಿದರೆ ಎಂಥ ಸೊಕ್ಕಿನವನೂ ಕೂಡ ಕೇಳಿಕೊಳ್ಳಬಹುದು.

೩೯ ಆತ್ಮಹತ್ಯೆ ಮಾಡಿಕೊಳ್ಳುವವನು ಪರಹತ್ಯೆಗೆ ಹಿಂಜರಿಯುವನೇ ?

೪೦ ಮನಸ್ಸಿನಂತೆ ಮಹಾದೇವನು ಅದರಿಂದ ಯಾವುದಕ್ಕೂ ಮನಸ್ಸೇ ಕಾರಣವು ಅದಕ್ಕಾಗಿ ಮನಸ್ಸನ್ನು ಯಾವಾಗಲೂ ಸ್ವಚ್ಛವಾಗಿರಿಸಿಕೊಳ್ಳಲಿಕ್ಕೆ ಪ್ರಯತ್ನಿಸುವದು

೪೧ ವಿಷಯಲಂಪಟನು ಕೆಲವೇಳೆ ನಿರ್ದಯನೂ ಆಗುವನು.

೪೨ ಸಮಾಜದಲ್ಲಿ ಪ್ರಮುಖರೆನ್ನಿಸಿಕೊಳ್ಳುವವರನ್ನನುಸರಿಸು ವದು ಸ್ವಾಭಾವಿಕವದೆ ಅದರಿಂದ ಮುಖಂಡರು ನೀತಿವಂತರಾಗಿರ ಬೇಕು. ಕುರಿಯ ಹಿಂಡಿನಂತೆ ಎಲ್ಲರೂ ಅವರನ್ನೇ ಅನುಸರಿಸುವರಾ ದ್ದರಿಂದ ಸಮಾಜದ ಪ್ರಗತಿಯಾಗಲಿ ಅವನತಿಯಾಗಲಿ ಅವರನ್ನೇ ಅವಲಂಬಿಸಿರುವದು

೪೩ ದೊಡ್ಡವರ ಮಕ್ಕಳು ದೊಡ್ಡವರಾಗಬೇಕೆಂದೆಲ್ಲಿಯೂ ಬರೆದಿಟ್ಟಿಲ್ಲ ಒಮ್ಮೊಮ್ಮೆ ಬಡವರ ಮಕ್ಕಳು ಶ್ರೀಮಂತರಾಗ ಬಹುದು ಶ್ರೀಮಂತರ ಮಕ್ಕಳು ಬಡವರಾಗಬಹುದು ಅವರವರ ಪೂರ್ವಪುಣ್ಯಕ್ಕನುಸರಿಸಿ ಎಲ್ಲವಾಗುವದು.

೪೪ ಪರರಿಗೆ ಅವಮರ್ಯಾದೆ ಮಾಡುತ್ತಿದ್ದು ಅವರಿಂದ ಮರ್ಯಾದೆಯನ್ನಪೇಕ್ಷಿಸುವದೆಷ್ಟು ಹುಚ್ಚತನವು.

೪೫ ಅಂಗೈ ನೆಕ್ಕುವದನ್ನು ಬಿಟ್ಟು ಮೊಳಕೈ ನೆಕ್ಕುವದಕ್ಕೆ ಪ್ರಯತ್ನ ಮಾಡುವವರೇ ಬಹಳ ಆದರೆ ಕಡೆಗೆ ನಿರಾಶರಾಗುವಲ್ಲಿ ಸಂದೇಹವಿಲ್ಲ

೪೬ ನಾವು ಒಳ್ಳೆಯವರಾಗಬೇಕೆಂದೆಷ್ಟು ಪ್ರಯತ್ನಿಸುವೆವೋ ಅಷ್ಟೇ ಕಷ್ಟಪರಂಪರೆಗಳೂ ಬರುವವು. ಅವಕ್ಕೆ ಹೆದರಿ ಹಿಂಜರಿ ಯದೆ ಅವು ಪರಮಾತ್ಮನ ಪರೀಕ್ಷೆಗಳಾದದ್ದರಿಂದ ಉತ್ತೀರ್ಣರಾಗ ಲೆತ್ನಿಸಬೇಕು.

೪೭ ಚರಾಚರ ಜೀವಿಗಳಿಗೆ ಪೀಡಿಸಬೇಡ.

೪೮ ಒಂದು ದೊಡ್ಡ ಕಟ್ಟಡವು ತಯಾರಾಗಬೇಕಾದರೆ ಹೇಗೆ ಸಾವಕಾಶವಾಗಿ ಆಗುವದೋ ಅದರಂತೆ ಆತ್ಮೋನ್ನತಿಯನ್ನು ಹೊಂದಬೇಕಾದರೂ ಸಾಧನದಿಂದಲೇ ಸಾಧ್ಯವಾದುದು. ಒಮ್ಮೆಲೇ ಯಾವದೂ ಆಗದು ಹಾಗೆ ಆದಂತೆನಿಸಿದರೂ ಬಹಳ ದಿನಗಳ ವರೆಗೆ ತಾಳದು. ಹಳ್ಳವು ತೀವ್ರ ತುಂಬಿ ಕೂಡಲೆ ಬರಿದಾಗುವಂತಾಗುವದು.

೪೯ ನಾವು ಸುಳ್ಳು ಹೇಳಿ ಕಷ್ಟದಿಂದ ದೂರಾಗಲೆತ್ನಿಸಿದ್ದು ಮನಸ್ಸಿಗೆ ಕಲಂಕನನ್ನುಂಟುಮಾಡಿ ಯಾವಾಗಲೂ ಗಾಸಿ ಮಾಡುವದಾದ್ದರಿಂದ ಸತ್ಯ ಹೇಳಿ ಕಷ್ಟವನ್ನೆದುರಿಸಿ ನಿರ್ಭಯರಾಗಿರಬೇಕು.

೫೦ ನಿರುಪದ್ರವಿಯಾಗಿ ಬಾಳಬೇಕು ಸ್ವಾರ್ಥಕ್ಕಾಗಿ ಪರರಿಗೆ ತ್ರಾಸು ಕೊಟ್ಟು ಸ್ವಾರ್ಥ ಸಾಧಿಸಿದರೂ ಹೊಳೆಯಲ್ಲಿ ಹುಣಸಿ ತೊಳೆದಂತೆ ವ್ಯರ್ಥವಾಗುವದು

೫೧ ತಾಯಿತಂದೆಗಳನ್ನು ಉಪವಾಸ ಕೆಡವಿ ವಿದ್ಯಾರ್ಜನೆ ಮಾಡಲು ಹಂಬಲಿಸುವವನಿಗೇನನ್ನಬೇಕು ? ಸಕಲ ತೀರ್ಥ ಕ್ಷೇತ್ರಗಳಾದ ಅವರನ್ನು ಆನಂದದಲ್ಲಿಟ್ಟು ಅದಕ್ಕಾಗಿ ದುಡಿದು ವೇಳೆ ಸಿಕ್ಕರೆ ವಿದ್ಯೆಗಾಗಿ ಹಂಬಲಿಸುವದು

೫೨ ನಮ್ಮ ಹೃದಯವು ಪರಿಶುದ್ಧವಾಗಿದ್ದರೆ ಎಂಥ ಶತೃವಿನ ಆಟವೂ ಸಾಗದು ಅವನನ್ನು ಕೂಡ ಪರಿವರ್ತಿಸಬಹುದು. ಅದೊಂದು ಗುಪ್ತಾಸ್ತ್ರವು.

೫೩ ಈ ಜಗದಲ್ಲಿ ಪ್ರತಿಯೊಬ್ಬರು ಒಂದೊಂದು ಕಾರ್ಯವನ್ನು ಮಾಡಲು ಬಂದಿರುವರು. ಆದರ ಅದರ ಕಡೆಗೆ ಲಕ್ಷ್ಯಕೊಡುವವರೆಷ್ಟು ? ಪ್ರತಿಯೊಬ್ಬನದೂ ಒಂದು ವಿಶಿಷ್ಟ ಜೀವನ ಚರಿತ್ರೆಯಾಗಿದೆ.

೫೪ ಶ್ರೀಗುರುವಿನ ಬೆಂಬಲವಿರುವಾಗ ಮಾನವರೆಷ್ಟು ತ್ರಾಸು ಕೊಟ್ಟಾರು ? ಅವರೆಷ್ಟು ಕೇಡು ಮಾಡಿಯಾರು ? ಶ್ರೀಗುರುಕೃಪೆ ಯೆಂಬ ಕೋಟೆಯೊಳಗಿದ್ದವನಿಗೆ ಹೊರಗಿನ ಶತ್ರುವಿನ ಬಾಣವೇನು ಮಾಡೀತು ? ಅದೇ ಶ್ರೀಗುರುವಿನ ಕೃಪೆಯಿಲ್ಲದಿದ್ದರೆ ಬೈಲಿಗೆ ಸಿಕ್ಕವ ನಂತೆ ಯಾವಾಗ ಶತ್ರುವಿನ ಬಾಣವು ಬಡೆದೀತೆಂಬುದು ನಿಯಮ ವಿಲ್ಲ ಆದರಿಂದ ಶ್ರೀಗುರು ಕೃಪಾ ಶ್ರೇಷ್ಠವಾದುದು.

೫೫ ಮನುಷ್ಯನು ಎಷ್ಟು ಎಚ್ಚರದಿಂದಿರುವನೋ ಅಷ್ಟು ಹಿತ ವಿದೆ. ಪ್ರತಿಯೊಂದರಲ್ಲೂ ಬಲು ಎಚ್ಚರವಿರಬೇಕು ಯಾಕಂದರೆ ತಿಳಿದಾಗಲಿ ತಿಳಿಯದೆಯಾಗಲಿ ಕಾಜಿನ ಚೂರು ನುಂಗಿದರೆ ಹೊಟ್ಟೆಗೆ ಅಪಾಯ ಮಾಡದೆ ಬಿಟ್ಟೀತೇ ? ಅದರಿಂದ ಶಕ್ಯವಾದಷ್ಟು ಎಚ್ಚರದಿಂದಿರುವದೊಳಿತು

೫೬ ನಮ್ಮ ಸ್ವಾರ್ಥಕ್ಕಾಗಿ ಎರಡನೆಯವರದೇ ಜೀವನವನ್ನು ಕೆಡಿಸುವದು ಎಂಥ ಮಾತು ?

೫೭ ಆನಂದವು ಹೊರಗಿರುವದಿಲ್ಲ, ಒಳಗಿರುವದು. ಅದನ್ನು ಶಾಂತ ರೀತಿಯಿಂದ ಶೋಧ ಮಾಡು

೫೮ ಭೋಗಕ್ಕಿಂತಲೂ ತ್ಯಾಗದಲ್ಲಿಯೇ ಸುಖಶಾಂತಿಯಿದೆ. ಮೃಗಜಲದ ಬೆನ್ನು ಹತ್ತಿ ಹತಾಶನಾಗಬೇಡ

೫೯ ನಿನ್ನ ಮನಸ್ಸು ಪರಿಶುದ್ಧವಾಗಿರುವಾಗ ಅಂಜುವಿ ಯಾರಿಗೆ ? ಅಂಜುವದೆಂದರೆ ಮನಸ್ಸಿನ ಮಾಲಿನ್ಯವನ್ನು ಒಪ್ಪಿ ಕೊಂಡಂತೆ ಆದರಿಂದ ಪರಿಶುದ್ಧ ಮನಸ್ಕನು ಹೆದರಬಾರದು.

೬೦ ಕ್ಷಣಿಕವಾದ ಶರೀರ ಸುಖಕ್ಕೆ ಆಶೆಮಾಡಿ ನಿತ್ಯ ಸುಖ ವನ್ನು ಕಳೆದುಕೊಳ್ಳಬೇಡ.

೬೧ ಕ್ಷಣ ಕ್ಷಣಕ್ಕೂ ಪರಮಾತ್ಮನು ಒಂದಿಲ್ಲೊಂದು ದೃಷ್ಟಾಂತವನ್ನು ತೋರಿಸಿ ಎಚ್ಚರಿಕೆ ಕೊಡುವನು ಆದರೆ ನಾವು ಅತ್ತ ಲಕ್ಷ್ಯ ಕೊಡುವದಿಲ್ಲ, ಕಣ್ಣಿದ್ದೂ ಕುರುಡರಂತಿರುವೆವು

೬೨ ನಾಲಮಾಡಿ ಮೃಷ್ಟಾನ್ನವನ್ನುಣ್ಣುವದಕ್ಕಿಂತ ಉಪವಾಸ ವಿರುವದೊಳಿತು

೬೩ ಜೀವನವನ್ನು ವ್ಯರ್ಥವಾಗಿ ಕಳೆದುಕೊಳ್ಳಬೇಡ ವೇಳೆಯ ಮಹತ್ವವನ್ನರಿತು ನಡೆ ಹೋದ ವೇಳೆ ಎಂದಿಗೂ ಸಿಗದು

೬೪ ಎಷ್ಟು ಓದಿದರೇನು? ಎಷ್ಟು ವಯೋವೃದ್ಧರಾದರೇನು? ಸದಾಚಾರಿಯಾಗದವನ ಬಾಳು ಹಾಳು

೬೫ ಜಗವನ್ನು ಮೋಸಮಾಡಿ ದೊಡ್ಡಾತನೆನಿಸಿಕೊಂಡರೆ ಎಷ್ಟು ದಿನ ನಡೆದೀತು? ಒಂದಿಲ್ಲೊಂದು ದಿನ ಹೊರಬೀಳುವದೇ. ಅಂದಬಳಿಕ ಯಥಾರ್ಥ ಜೀವಿಯಾಗಿರಬೇಕು.

೬೬ ಸಂತೆಗೆ ಹೋದವನು ತಾನು ಕೊಂಡುಕೊಳ್ಳುವದನ್ನು ಮರೆತು ಅಲ್ಲಿಯ ಆಟಪಾಟಗಳನ್ನು ನೋಡುತ್ತ ಕಾಲಹರಣ ಮಾಡಿ ದರೆ ತನಗೆ ಬೇಕಾದ ಅಂಗಡಿಗಳು ಸಿಗದೆ ನಿರಾಶನಾಗುವ ಸಂಭವ ಹೆಚ್ಚು. ಅದೇ ತನ್ನ ಉದ್ದೇಶವನ್ನು ಮುಗಿಸಿಕೊಂಡು ಉಳಿದ ವೇಳೆ ಯಲ್ಲಿ ವಿಶ್ರಮಿಸಿದರೆ ಜಾಣನೆನಿಸಿಕೊಳ್ಳುವನು

೬೭ ಯಾವದೇ ವಿಚಾರದಲ್ಲಿರಲಿ ಅಥವಾ ಮಾತನಾಡುತ್ತಿರಲಿ ಆಕಸ್ಮಾತ್ ಗಡಿಯಾರದ ಗಂಟೆಯಾದರೆ ಅದು ನಿಜವೆಂದು ಪರಮಾ ತ್ಮನು ಹೇಳಿದಂತೆ ತಿಳಿ, ಅನುಭವ ಪಡೆ.

೬೮ ಕಾಜಿನ ಮನೆಯಲ್ಲಿದ್ದವರು ಹೇಗೆ ಕಲ್ಲನ್ನೊಗೆಯಬಾ ರದೋ ಅದರಂತೆ ತನ್ನ ಸ್ಥಿತಿಗತಿಯನ್ನರಿತಿರಬೇಕು.

೬೯ ಬ್ರಹ್ಮಚಾರಿಯಾಗಿದ್ದು ಚಿತ್ತಶುದ್ಧಿ ಮಾಡಿಕೊಂಡರೇನೇ ಆಧ್ಯಾತ್ಮ ಜೀವನದಲ್ಲಿ ಪ್ರಗತಿ ಸಾಧ್ಯ

೭೦ ಎರಡನೆಯವರಲ್ಲಿ ಗುಣದೋಷವು ಕಂಡು ಬಂದಾಗ ಅವರನ್ನು ಹಳಿಯುದೆ ನಿನ್ನಲ್ಲಿ ಅಂಥ ದೋಷಗಳು ಎಷ್ಟು ಪ್ರಮಾಣ ದಿಂದಿರುವವೆಂಬುದನ್ನು ವಿಚಾರಿಸಿಕೋ ಅಂದರೆ ಪರನಿಂದೆಗೆ ಆಸ್ಪದ ಸಿಗದು, ಪ್ರತಿಯಾಗಿ ಸ್ವಂತದ ಗುಣದೋಷ ಸುಧಾರಿಸಿಕೊ ಳ್ಳಲನುವಾದೀತು

೭೧ ಹೇಗೆ ಒಂದು ಊರಿಗೆ ಹೋಗಲು ಎಷ್ಟೋ ಮಾರ್ಗ ಗಳಿರುವವೋ ಹಾಗೆಯೇ ಪರಮಾತ್ಮನನ್ನು ಅರಿಯಲು ಎಷ್ಟೋ ಮಾರ್ಗಗಳಿವೆ ಅಂದಬಳಿಕ ನಿನ್ನದೇ ಸತ್ಯವೆಂದು ಹಟಹಿಡಿದು ಪರರನ್ನು ದ್ವೇಷಿಸಬೇಡ, ಗುಣಗ್ರಾಹಿಯಾಗು

೭೨ ನಮ್ಮ ಕೈಯ್ಯೊಳಗಿನ ಬೆರಳುಗಳು ಒಂದರಂತೊಂದಿಲ್ಲ. ಒಂದೇ ತಾಯಿಯಿಂದ ಹುಟ್ಟಿದ ಮಕ್ಕಳು ಒಂದೇ ಸ್ವಭಾವದವರಿ ರುವದಿಲ್ಲ ಅಂದಬಳಿಕ ಈ ಜಗದೊಳಗೆ ಒಬ್ಬರಂತೆ ಇನ್ನೊಬ್ಬರು ಹೇಗೆ ಸಿಕ್ಕಾರು?

೭೩ ಎಂಥ ಕುರೂಪಿಯೂ ಕೂಡ ತನ್ನ ಮುಖ ಸುಂದರವಿದೆ ಯೆಂದೇ ತಿಳಿದು ಅದರ ಉಪಚಾರವನ್ನು ಮಾಡಿಕೊಳ್ಳುವನು, ಎಂಥ ಕ್ಷುಲ್ಲಕ ಪದಾರ್ಥವೂ ಮಹತ್ವದ ಔಷಧಿಯಾಗಿ ಪರಿಣಮಿಸುವದು, ಎಂಥ ಕೀಳು ಮನುಷ್ಯನೂ ಕೂಡ ಒಮ್ಮೊಮ್ಮೆ ಉಪಯೋಗ ಬೀಳು ವನು ಅಂದ ಬಳಿಕ ಪರಮಾತ್ಮನು ಸೃಷ್ಟಿಸಿದ ಈ ಜಗದಲ್ಲಿ ನಿರುಪ ಯೋಗಿಯಾದದ್ದಾವುದೂ ಇಲ್ಲ ಕುರೂಪಿಯಾದವರಾರೂ ಇಲ್ಲ. ಪ್ರತಿಯೊಂದರಲ್ಲಿ ವಿಶಿಷ್ಟವಾದ ಸೌಂದರ್ಯವೂ ಉಪಯೋಗಿ ಗುಣವೂ ಇದ್ದೇ ಇರುವದು.

೩೪ ಹಡೆದ ತಾಯಿ ಸೇರದಿದ್ದರೆ, ಬೆನ್ನಿಗೆ ಬಿದ್ದ ಬಂಧುಗಳು ದ್ವೇಷಿಸಿದರೆ, ನಂಬಿದ ಮಿತ್ರರು ಮೋಸ ಮಾಡಿದರ, ಕೈ ಹಿಡಿದ ಹೆಂಡತಿ ವಂಚಿಸಿದರೆ ದುಃಖಿಸಬೇಡ. ಪಾರಮಾರ್ಥಿಕ ದೃಷ್ಟಿಯಿಂದ ಮೋಹವನ್ನು ಬಿಡಲು ಸಹಾಯಕಾರಿಗಳೇ, ಪರಮಾತ್ಮನು ತನ್ನ ಕಡೆಗೆ ಒಲಿಯಲೆಂದು ಮಾಡಿದ ಕೃಪೆಯೆಂದೇ ತಿಳಿ.

೩೫ ನಶ್ವರವಾದ ಈ ಶರೀರವು ಎಂಥವರಿದ್ದರೂ ರೋಗಾದಿ ಗಳಿಗೆ ಸಿಲುಕದೆ ಬಿಡದು ಹುಟ್ಟಿದ್ದು ಒಂದಿಲ್ಲೊಂದು ದಿನ ನಾಶ ವಾಗಲೇ ಬೇಕು. ಆದರಿಂದ ಶರೀರದ ಮೇಲೆ ಆತ್ಮನಿಗಿಂತ ಹೆಚ್ಚು ಪ್ರೀತಿಸಬೇಡ.

೩೬ ಬಾಡಿಗೆಯ ಮನೆಯಲ್ಲಿದ್ದರೂ ಇರುವ ವರೆಗೆ ಹೇಗೆ ಅದರ ಬಗ್ಗೆ ಕಾಳಜಿ ತೆಗೆದುಕೊಂಡು ದುರುಸ್ತಾಗಿರುವಂತೆ ನೋಡಿ ಕೊಂಡರೆ ಒಳಗಿರುವವರಿಗೆ ಸುಖವಿದೆಯೋ ಹಾಗೆಯೇ ಶರೀರವನ್ನು ದುರ್ಲಕ್ಷಿಸದೆ ಆರೋಗ್ಯವಾಗಿಟ್ಟುಕೊಳ್ಳುವದೋಳಿತು.

೩೭ ಮನಸ್ಸಿಗೆ ಬಂದಂತೆ ನಡಿಯಬೇಡ, ಅದೆಲ್ಲಿಗೆ ಒಯ್ದೀ ತೆಂಬುದು ನಿಯಮವಿಲ್ಲ, ಸ್ವಭಾವತಃ ನೀರು ತೆಗ್ಗಿನ ಕಡೆಗೆ ಹೋಗು ವಂತೆ ಅಪಥ್ಯ ಪದಾರ್ಥದ ಕಡೆಗೇ ಮನಸ್ಸೆಳೆಯುವದು, ಸ್ವಾಭಾ ವಿಕವು ಆದರಿಂದ ಸುವಿಚಾರವೆಂಬ ಲಗಾಮವಿರಲಿ

೩೮ ಇದ್ದವರು ಅದಿಲ್ಲದವರನ್ನು ನೋಡಿ ನಗಬಾರದು.

೩೯ ಕಾಲಕ್ಕನುಸಾರವಾಗಿ ಮನುಷ್ಯನ ಬುದ್ಧಿಯೂ ಬದ ಲಾಗುವದು ಆದರಿಂದ ಯಾರಿಂದ ಯಾವ ಕಾಲಕ್ಕೇನಾದೀತು ನಿಯಮವಿಲ್ಲ

೪೦ ಸತತೋದ್ಯೋಗಿಯಾಗಿರು ಅಂದರೆ ಮನಸ್ಸು ಹರಿದಾಡ ಲಾರದು.

೮೧ ತಾನೇ ಜಾಣನೆಂದು ಪರರ ಉಪದೇಶಗಳಿಗೆ ಕಿವಿಗೊಡದೆ ಕೂಪಮಂಡೂಕ ವೃತ್ತಿಯಿಂದಿರಬಾರದು. ನಮ್ಮಕಿಂತ ಅನುಭವಿಗಳೂ ಇರಬಹುದು. ಈ ಜಗನೆಂಬ ಪಾಠಶಾಲೆಯಲ್ಲಿ ಎಷ್ಟು ಅನುಭವ ಪಡೆದರೂ ಕಡಿಮೆಯೇ. ಸರ್ವಜ್ಞರು ಯಾರೂ ಇಲ್ಲ. ನ್ಯೂಟನ್‌ನಂಥವನು ಕೂಡ ತನ್ನಜ್ಞಾನವು ಸಮುದ್ರದ ಮಳಲಿನ ಕಣದಕಿಂತಲೂ ಸಣ್ಣದೆನ್ನುವಾಗ ಉಳಿದವರ ಪಾಡೇನು ?

೮೨ ರೋಗಗಳು ಅಕಸ್ಮಾತ್ತಾಗಿ ಆಕಾಶದಿಂದ ಬೀಳುವದಿಲ್ಲ. ನಾವು ಆಹಾರ ವಿಹಾರಾದಿಗಳಲ್ಲಿ ತಪ್ಪುವದರಿಂದಲೇ ಸಂಭವಿಸುವವು

೮೩ ರೂಢಿಯೊಳಗಿನ ದೃಷ್ಟಾಂತವೆಂದರೆ ಊದಬತ್ತಿಯು ಹೇಗೆ ಸ್ವತಃ ಸುಟ್ಟುಕೊಂಡು ಬೂದಿಯಾಗುತ್ತಿದ್ದರೂ ಪರರಿಗೆ ಸುವಾಸನೆಯನ್ನು ಕೊಡುವದೋ ಅದರಂತೆ ಸಜ್ಜನರು ಸ್ವಂತಕ್ಕೆ ಕಷ್ಟವಾದರೂ ಲಕ್ಷಿಸದೆ ಪರೋಪಕಾರ ಮಾಡುವರು

೮೪ ಸ್ತ್ರೀಯು ಬ್ರಹ್ಮಚಾರಿಗಳನ್ನು ಹಾಳು ಮಾಡುವವಳೆಂದು ದ್ವೇಷಿಸದೆ ಎಲ್ಲರಿಗೂ ಜನ್ಮ ಕೊಟ್ಟ ಮಾತೆಯೆಂದು ಸಕಲ ಸ್ತ್ರೀಯರನ್ನೂ ಮಾತೃಭಾವದಿಂದ ನೋಡು

೮೫ ಮೊದಲು ತನ್ನ ಸುಧಾರಣೆ, ಆ ಮೇಲೆ ತನ್ನ ಬಂಧುಬಳಗದವರು, ಅನಂತರ ತನ್ನ ಗ್ರಾಮದ ಸುಧಾರಣೆ, ಆ ಮೇಲೆ ಪ್ರಾಂತದ್ದು ಅನಂತರ ರಾಷ್ಟ್ರ ಸುಧಾರಣೆಗಾಗಿ ಹೆಣಗಾಡುವವನು ಸ್ಥಿರವಾಗಿ ಉಳಿದು ಕೀರ್ತಿಶಾಲಿ ಆಗುವಲ್ಲಿ ಸಂದೇಹವಿಲ್ಲ. ಅದೇ ಒಮ್ಮೆಲೇ ದೇಶಸೇವೆ ಮಾಡುವ ಹವ್ಯಾಸಕ್ಕೆ ಬಿದ್ದರೆ ಉಸುಕಿನ ಮೇಲೆ ಕಟ್ಟಲು ಪ್ರಯತ್ನಿಸಿದ ಕಟ್ಟಡದಂತಾಗುವದು. ಅದರಿಂದ ಮನೆದೆಯ ಮಾರ್ಗ ಗೆದೊಬೇಕು

೮೬ ಪೂಜನೆ, ಭಜನೆ, ಸ್ತೋತ್ರಾದಿಗಳಿಂದ ದೇವರು ಪ್ರಸನ್ನನಾಗುವನೆಂದ ಬಳಿಕ ಮಾನವರೇಕೆ ಮುಖಸ್ತುತಿಯಿಂದ ಪ್ರಸನ್ನರಾಗಲಿಕ್ಕಿಲ್ಲ?

೮೭ ಕತ್ತೆಗೆ ಯಾರಾದರೂ ಮೇವು ಕೊಂಡು ಹಾಕಿದ್ದುಂಟೇ? ಆದರೆ ದುಡಿಸಿಕೊಳ್ಳುವವರೇ ಬಹಳ ಹಾಳು ಗೋಡೆಯ ವಾಸ ತಿಪ್ಪೆಯೊಳಗಿನ ಕಸದ ತಿನಿಸು ಅದಕ್ಕೆ ತಪ್ಪಿದ್ದಲ್ಲ. ಇದನ್ನಾರೂ ಲಕ್ಷಿಸುವದಿಲ್ಲ ಇದರ ಕಾರಣವೇನಿರಬಹುದು? ದುಡಿಸಿಕೊಳ್ಳುವ ಎಲ್ಲ ಪ್ರಾಣಿಗಳಿಗೂ ಮನುಷ್ಯನು ಹೊಟ್ಟೆಗೆ ಹಾಕುತ್ತಿರುವಾಗ ಇದಕ್ಕೇಕೆ ಹಾಕುವದಿಲ್ಲ? ಅದರ ಕರ್ಮವೆನ್ನಬೇಕು ಆದರಿಂದ ಬುದ್ಧಿವಂತನಾದ ಮಾನವನು ಕುಕರ್ಮಗಳನ್ನೆಂದಿಗೂ ಮಾಡಬಾರದು

೮೮ ಸೂರ್ಯನಕಿಂತ ಸಾವಿರ ಪಟ್ಟು ಪ್ರಕಾಶಮಾನನಾದ ಆತ್ಮನು ನಮ್ಮ ದೇಹದಲ್ಲಿದ್ದರೂ, ಸೂರ್ಯನು ಈ ಜಗತ್ತಿನ ಕತ್ತಲೆಯನ್ನು ನಿವಾರಣೆ ಮಾಡುವನು. ಮಾಯಾದ ಕತ್ತಲೆಯನ್ನು ದೂರ ಮಾಡುವದು ನಮ್ಮೊಳಗಿನ ಆತ್ಮನಿಗೆ ಅಸಾಧ್ಯವಾದೀತೇ? ಆದಾಗ್ಯೂ ಈ ಪಂಚ ಮಹಾಭೂತಗಳಿಂದಾದ ನಮ್ಮ ಶರೀರದಲ್ಲಿ ಸಿಕ್ಕು ಮಾಯಾದ ಜಾಲದಲ್ಲಿ ನಾವು ತೊಳಲುತ್ತೇವೆ.

೮೯ ಎರಡನೆಯವರ ಹಿತಕ್ಕಾಗಿ ನಾವು ಕಠೋರದಿಂದ ಹೇಳಿ ಅವರಲ್ಲಿ ನಮ್ಮ ಬಗ್ಗೆ ವಿಪರೀತ ಭಾವನೆಯನ್ನುಂಟು ಮಾಡುವದಕ್ಕಿಂತ ಪ್ರೇಮದಿಂದ ಹೇಳಿ ಅವರಿಗೆ ತಿಳಿಸಿಕೊಟ್ಟರೆ ಪರಸ್ಪರರಲ್ಲಿ ಸದ್ಭಾವನೆಗಳೂ ಪ್ರೇಮವೂ ನೆಲೆಗೊಳ್ಳಲಿಕ್ಕಿಲ್ಲವೇ?

೯೦ ಪರರು ನಮ್ಮ ಮುಖಸ್ತುತಿ ಮಾಡಿದರೆ ಉಬ್ಬಿದೆವೆಂದರೆ ನಾವುಗನ್ನಡಿಯಲ್ಲಿ ಮುಖವನ್ನು ನೋಡಿಕೊಂಡಂತೆಯೇ ಸರಿ.

೯೧ ಹರನು ಮುನಿದರೆ ಗುರು ಕಾಯುವನು ಆದರೆ ಗುರು ಮುನಿದರೆ ಹರನು ಕಾಯನು.

೯೨ ಹುಟ್ಟುಗುಣ ಹುಗಿದರೂ ಹೋಗುವದಿಲ್ಲವೆಂಬುದು ನಿಜವಾದದ್ದು ಯಾಕಂದರೆ ಪೂರ್ವ ಕರ್ಮಕ್ಕನುಸರಿಸಿ ಆ ಗುಣ ಗಳು ಮನೆಮಾಡಿಕೊಂಡಿರುತ್ತವೆ

೯೩ ಹಿಂದಿನ ಸಂಚಿತಕ್ಕನುಸಾರವಾಗಿ ಜೀವರು ಭೋಗಿಸು ತ್ತಿದ್ದರೂ ಈಗಿನ ಕ್ರಿಯಮಾಣದಿಂದ ಅದನ್ನೆಲ್ಲ ನೀಗಿ ಪರಿಶುದ್ಧ ವಾದ ಪ್ರಗತಿಯನ್ನು ಪಡೆಯಲು ಸಾಧ್ಯವಿದ. ಅದು ಹೇಗಂದರೆ ನಿನ್ನೆ ಜಡಪದಾರ್ಥಗಳನ್ನು ಮನಬಂದಂತೆ ಊಟಮಾಡಿದ್ದೇವೆಂದರೆ ಇಂದು ನಾವೇನನ್ನೂ ತೆಗೆದುಕೊಳ್ಳದೆಯಿದ್ದರೂ ಅಜೀರ್ಣದ ಬಾಧೆ ಯಿಂದ ಬಳಲುವಲ್ಲಿ ಸಂದೇಹವಿಲ್ಲ ಆ ಅಜೀರ್ಣವೆಲ್ಲ ಹೋಗ ಬೇಕಾದರೆ ಸಂಪೂರ್ಣ ದಿವಸ ಲಂಘನ ಮಾಡಬೇಕಾಗುವದು. ಅಂದರೆ ಹಿಂದಿನ ಸಂಚಿತವನ್ನಿಂದು ಶಾಂತ ರೀತಿಯಿಂದ ಭೋಗಿಸಿ ದಂತೆ ಆದರೆ ಆಯುಷ್ಯವೆಲ್ಲ ಇದರಲ್ಲೇ ಹೋದರೆ ಸುಖದ ದಿನ ಗಳನ್ನೆಂದಿಗೆ ನೋಡುವದು? ಮುಂದಿನ ಜನ್ಮವನ್ನಾರು ನೋಡಿರು ವರು? ಅದರಿಂದ ನಿನ್ನಿನ ಅಜೀರ್ಣವು ಹೋಗಿ ಇಂದು ಹೊಸ ರಸಾ ಸ್ವಾದನೆದ ಆನಂದವನ್ನು ಪಡೆಯಲು ಹೇಗೆ ಪಾಚಕ ಚೂರ್ಣ ವನ್ನು ತೆಗೆದುಕೊಳ್ಳುವೆವೋ ಅದರಂತೆ ಸಂಚಿತವನ್ನು ಜೀರ್ಣಿಸಲು ಸತ್ಸಂಗದ ಸಹಾಯದಿಂದ ಪ್ರಾಯಶ್ಚಿತ್ತದ ಮೂಲಕ ಶ್ರೀಸದ್ಗುರು ವಿನ ಕೃಪೆಯಿಂದ ಅದನ್ನು ಜೀರ್ಣಿಸಿ ಹೃದಯ ಪರಿವರ್ತನೆ ಮಾಡಿ ಕೊಂಡು ಸದ್ಭಾವನೆಯನ್ನು ಇಟ್ಟುಕೊಂಡು ಹೋದಲ್ಲಿ ಈ ಜನ್ಮದ ಲ್ಲಿಯೇ ಎಲ್ಲ ಸುಖವನ್ನನುಭವಿಸಬಹುದು ಮನುಷ್ಯ ಪ್ರಯತ್ನಕ್ಕೆ ಅಸಾಧ್ಯವೆಂಬುದಿಲ್ಲ. ಯಾಕಂದರೆ ನರನು ನಾರಾಯಣನಂಶವಾ ಗಿದ್ದಾನೆ.

೯೪ ಪಂಢರಪುರದ ಶ್ರೀವಿಠ್ಠಲನ ಬಾರಿಗೆ ಕುಳಿತವನಿಗೆ ಎಷ್ಟು ತಡವಾದರೂ ಆತನ ದರ್ಶನವು ಹೇಗೆ ಸಿಕ್ಕೇ ತೀರುವದೋ ಅದ ರಂತೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಳ್ಳಲು ಹಂಬಲಿಸುವ ಸಾಧಕನಿಗೂ ಸಾಧ್ಯವಿದೆ. ಆದರೆ ಅರ್ಧದಲ್ಲಿ ಬೇಜಾರಪಟ್ಟು ದಾರಿ ತಪ್ಪಿದವನಿಗೆ ಯಾವುದೂ ಸಿಗದೆ ಇಲ್ಲಿಯ ವರೆಗೆ ಪ್ರಯತ್ನಿಸಿದ್ದು ವ್ಯರ್ಥವಾಗಿ ನಿರಾಶನಾಗಬೇಕಾಗುವದು

೯೫ ಅಂತರಂಗದಲ್ಲಿ ಅದ್ವೈತಿಯಾಗಿದ್ದರೂ ವ್ಯವಹಾರದಲ್ಲಿ ದುರುಪಯೋಗ ಮಾಡಬೇಡ. ಮಂಗನ ಕೈಯ್ಯಲ್ಲಿ ಹೂವು ಕೊಟ್ಟಂತಾದೀತು.

೯೬ ಸಂಶಯ ಮಾಡುತ್ತ ಹೋದ ಹಾಗೆಲ್ಲ ಅದು ಹೆಚ್ಚು ವದೇ ಹೊರತು ಕಡಿಮೆಯಾಗದು. ಆದರಿಂದ ನಿಸ್ಸಂಶಯನಾಗಿರು ವದೇ ಲೇಸು ಯಾಕೆಂದರೆ ಆಗುವದು ಆಗೇ ತೀರುವದು ಹೋಗು ವದು ಹೋಗೇ ತೀರುವದು.

೯೭ ಇಂದು ಬ್ರಹ್ಮಜ್ಞಾನವನ್ನು ಬರೇ ಬಾಯಿಂದ ಹೇಳಲು ಕಲಿತರೂ ಅಡ್ಡಿಯಿಲ್ಲ. ಕೃತಿಯಲ್ಲಿರದಿದ್ದರೂ ಒಂದಿಲ್ಲೊಂದು ದಿನ ಹೇಳುವವನು ತಾನೇ ನಾಚಿಕೊಂಡು ಕೃತಿಯಲ್ಲಿ ತರಲು ಪ್ರಯತ್ನಿಸುವನು,

೯೮ ಪರಬ್ರಹ್ಮನ ಅಂಶವೇ ನಾವಾಗಿರುವಾಗ ಜಗವೆಲ್ಲ ಆತನಂಶವಾಗಿ ಅವನಿಂದೊಡಗೂಡಿರುವಾಗ ನಮಗೂ ನಾವು ನೋಡುವದೆಲ್ಲದಕ್ಕೂ ಭೇದವೇನಿದೆ? ಅಂದಬಳಿಕ ನಮಗೆ ಅದಿಲ್ಲ ಇದಿಲ್ಲವೆಂದು ದುಃಖಿಸುವದಕ್ಕಿಂತ ನಮ್ಮ ಸ್ವರೂಪಗಳೇ ಆದ ಇತರರ ಆನಂದವೇ ನಮ್ಮ ಆನಂದವೆಂದು ತಿಳಿದರೆ ನಾವೆಷ್ಟು ಸುಖಿಗಳಾಗಬಹುದು?

೯೯ ದೇವರನ್ನು ಪ್ರತ್ಯಕ್ಷವಾಗಿ ಯಾರೂ ನೋಡಿದಂತಿಲ್ಲ. ಆದರೆ ಅವನಂತೆಯೇ ಲೀಲಾ ಮಾಡಿ ತೋರಿಸುವ ಸತ್ಪುರುಷರನ್ನು ನೋಡಿದ್ದೇವೆ ಅವರ ಲೀಲೆಗಳನ್ನೂ ನೋಡುತ್ತೇವೆ ಅಂದಬಳಿಕ ಅಂಥವರ ದರ್ಶನಾಶೀರ್ವಾದಗಳಿಂದ ಪುನೀತರಾಗಲು ಯತ್ನಿಸುವದು ಯೋಗ್ಯವಲ್ಲವೇ ?

೧೦೦ ದುರ್ಜನರ ಸಹವಾಸಕ್ಕಿಂತ ಸಜ್ಜನರದು ನೆಟ್ಟಗೆ ಅದಿಲ್ಲದಿದ್ದರೆ ಏಕಾಂತವಾಸವಾಗಲಿ ಪುಸ್ತಕಗಳ ಸಹವಾಸವಾಗಲಿ ನೆಟ್ಟಗೆ.

೧೦೧ ತೋಯಿಸಿಕೊಂಡ ಬಳಿಕ ಮಳೆಯ ಅಂಜಿಕೆ ಏತಕ್ಕೆನ್ನುವಂತೆ ಮನುಷ್ಯನು ಮೊದಮೊದಲು ಕಷ್ಟಗಳಿಗಂಜುವನು ಅವು ಒಂದೇ ಸವನೆ ಬರಹತ್ತಿದರೆ ಧೈರ್ಯುಂಡಂತಾಗಿ ಕಷ್ಟಗಳಿಗೆ ಅಂಜುವದನ್ನೇ ಬಿಟ್ಟುಬಿಡುವನು

೧೦೨ ಯೋಗ್ಯ ವೇಳೆಯಲ್ಲಿ ಆಯಾಯ ಕೆಲಸಗಳನ್ನು ಮಾಡಿದರೆ ನೆಟ್ಟಗಿರುವದು, ಅವೇಳೆಯಲ್ಲಿ ಮಾಡಹೋದರ ಕಾರ್ಯಸಿದ್ಧಿಯಾಗದು

೧೦೩ ಅತ್ಯಂತ ಚಂಚಲವಾದ ಮನದ ಮಂಗನಾಟದ ಬಲಿಯಲ್ಲಿ ಸಿಲ್ಕಿ ಗೋಳಾಡದವರು ಈ ಜಗದಲ್ಲುಂಟೇ ?

೧೦೪ ನೊಣದ ನೆತ್ತಿಯಲ್ಲಿ ವಿಷವಿರುವದು, ಹಾವಿನ ಹಲ್ಲಿನಲ್ಲಿ ವಿಷವಿರುವದು. ಆದರೆ ಮನುಷ್ಯನ ನಾಲಿಗೆಯಲ್ಲಿ ವಿಷವೂ ಅಮೃತವೂ ಕೂಡಿಯೇ ಇರುವವು ಸವಿ ಮಾತನಾಡಿದರೆ ಅಮೃತವೂ ಕಠೋರ ಮಾತನಾಡಿದರೆ ವಿಷವೂ ಆಗುವವು ಆದರಿಂದ ಬೆಲ್ಲಯಿಲ್ಲದಿದ್ದರೂ ಬೆಲ್ಲದಂತೆ ಮಾತನಾಡಿ ಜನರ ಪ್ರೀತಿ ಗಳಿಸಬಾರದೇಕೆ ? ಹೃದಯ ಮಾತ್ರ ಶುದ್ಧವಾಗಿರಬೇಕು.

೧೦೫ ವೇದಾಂತ ಶ್ರವಣವನ್ನು ಮಾಡಲು ಪ್ರಯತ್ನಿಸು ಇಂದಿಲ್ಲ ನಾಳೆ ಮನನ ಮಾಡಲು ಬರುವದು. ಶಾಲೆಗೆ ಹೋಗಲು ಹತ್ತಿದವನು ಎಷ್ಟು ಸಲ ಉತ್ತೀರ್ಣನಾಗದೆ ಹಿಂದೆ ಬಿದ್ದಾನು? ಒಂದಿಲ್ಲೊಂದು ದಿನ ಕಷ್ಟಪಟ್ಟು ಓದಿ ಮುಂದೆ ಹೋಗೇ ಹೋಗುವನು ಆದರೆ ಶಾಲೆಗೆ ಹೋಗದವನು ಮಾತ್ರ ಹಾಗೆ ಮಾಡನು.

೧೦೬ ಊಟ ಮಾಡುವವರು ಮಲವಿಸರ್ಜನೆ ಮಾಡುವದಿಲ್ಲವೆಂದರೆ ಹೇಗಾದೀತು! ಷಡ್ರಸಗಳನ್ನು ತಿನ್ನುವವನಿಗೆ ಷಡ್ರಿಪುಗಳು ಕಾಡುವದಿಲ್ಲವೆಂದರೆ ಹೇಗೆ? ಹುರಿದ ಬೀಜದಂತಾದ ಜ್ಞಾನಿಗೆ ಮಾತ್ರ ಕಾಡಲಾರವು.

೧೦೭ ಹಸಿವಾದಾಗ ಹೊಟ್ಟು ಕೂಡ ಸಿಹಿಯಾಗಿ ಹತ್ತುವದು ಹೊಟ್ಟೆ ತುಂಬಿದ ಬಳಿಕ ಪಕ್ವಾನ್ನವೂ ಕೂಡ ಸೇರಲಾರದು. ಅಂದ ಬಳಿಕ ಹಸಿವೇ ಸಿಹಿ ಆ ವೇಳೆಯಲ್ಲಿ ಹಳಿಸಿದ್ದೂ ತಂಗುಳವನ್ನಂಡರೂ ಅಮೃತವೆನಿಸುವದು.

೧೦೮ ಎಲ್ಲ ರುಚಿಗಳಲ್ಲಿ ಮಾತಿನ ರುಚಿ ಹೆಚ್ಚಿನದೆಂದು ಕೆಲವರ ಮತ. ಯಾಕಂದರೆ ಮಾತಿನ ರುಚಿ ತೆಗೆದುಕೊಂಡರೆ ಹಸಿವೆ ನೀರಡಿಕೆಗಳು ಕೂಡ ಹೋಗುವವು.



ಲೇಖಕರು,



ಗಂಗಾಧರ ಸುಜ್ಞಾನಶಾಸ್ತ್ರೀ ಹಿರೇಮಠ,

ಅಮ್ಮಿಣಗಿ